# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಹೆಚ್.ಎಂ ರಮೇಶ್ ಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 263

ಉತ್ತರಿಸಬೇಕಾದ ದಿನಾಂಕ : 02.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಹಕಾರ ಇಲಾಖೆಯಿಂದ ರೈತರಿಗಾಗಿ ಇರುವ ವಿವಿಧ ಸಾಲ ಯೋಜನೆಗಳಾವುವು: (ಈ ಸಾಲ ಯೋಜನೆಗಳ ನಿಯಮಗಳ ಸಂಪೂರ್ಣ ಮಾಹಿತಿ ನೀಡುವುದು) | ಸಹಕಾರ ಸಂಘಗಳಲ್ಲಿ ರೈತರಿಗಾಗಿ ಕೃಷಿ, ಕೃಷಿಯೇತರ ಉದ್ದೇಶಗಳಿಗೆ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲವನ್ನು ನೀಡುವ ಯೋಜನೆಗಳು ಇರುತ್ತವೆ.<br>ಪ್ರತೀ ಸಹಕಾರ ಸಂಘವು ತಮ್ಮ ಉಪವಿಧಿಗಳಲ್ಲಿ ಸದಸ್ಯರ ಅವಶ್ಯಕತೆಗನುಗುಣವಾಗಿ ಸಾಲದ ನಿಯಮಾವಳಿಗಳನ್ನು ರೂಪಿಸಿಕೊಂಡಿದ್ದು, ಸರ್ಕಾರದಿಂದ ಒಂದೇ ಬಗೆಯ ನಿಯಮಗಳನ್ನು ರೂಪಿಸಿರುವುದಿಲ್ಲ. ಸರ್ಕಾರದಿಂದ ಬಡ್ಡಿ ಸಹಾಯಧನ ನೀಡುವ ಯೋಜನೆಗಳಿಗೆ ಮಾತ್ರ ಸರ್ಕಾರವು ಮಾನದಂಡಗಳನ್ನು ರೂಪಿಸಲಾಗಿದ್ದು, ನಿಯಮಗಳ ಮಾಹಿತಿಯನ್ನು ಪ್ರಶ್ನೆ ಸಂಖ್ಯೆ (ಆ) ರಲ್ಲಿ ನೀಡಲಾಗಿದೆ. |
| ಆ) | ಈ ಯೋಜನೆಗಳಲ್ಲಿ ಸಹಾಯಧನ ಹೊಂದಿರುವ ಯೋಜನೆಗಳು ಯಾವುವು; | ಸರ್ಕಾರದ ಬಡ್ಡಿ ಸಹಾಯಧನ ಯೋಜನೆಯಡಿ ಸಹಕಾರ ಸಂಘಗಳ ಮೂಲಕ ರೈತರಿಗೆ ಈ ಕೆಳಕಂಡ ರೀತಿಯ ಸಾಲಗಳನ್ನು ವಿತರಿಸಲಾಗುತ್ತಿದೆ.<br>**1) ಕುಟುಂಬಕ್ಕೆ ರೂ. 3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದ ಸಾಲದ ಯೋಜನೆ**<br>• ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಲ್ಯಾಂಪ್ಸ್, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಬೆಳೆ ಸಾಲ/ ಹೈನುಗಾರಿಕೆ/ ಮೀನುಗಾರಿಕೆ ಸಾಲಗಳಿಗೆ ಅನ್ವಯವಾಗುತ್ತದೆ.<br>• ಈ ಯೋಜನೆಯು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳ ಸಾಲಕ್ಕಾಗಿ ಗರಿಷ್ಟ ರೂ.2.00 ಲಕ್ಷಗಳಿಗೆ ಹಾಗೂ ಒಂದು ಕುಟುಂಬಕ್ಕೆ ಬೆಳೆ ಸಾಲ, ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳದ ಸಾಲ ಒಟ್ಟುಗೂಡಿಸಿ ರೂ.3.00 ಲಕ್ಷಗಳಿಗೆ ಮಾತ್ರ ಅನ್ವಯವಾಗುತ್ತದೆ.<br>• ರೈತನು ರೂ.20,000/-ಗಳ ಮಾಸಿಕ ವೇತನ/ಪಿಂಚಣಿ ಪಡೆಯುತ್ತಿದ್ದರೆ ಅಥವಾ ಆದಾಯ ತೆರಿಗೆ ಪಾವತಿದಾರರಾಗಿದ್ದಲ್ಲಿ ಬಡ್ಡಿ ಸಹಾಯಧನ ಲಭಿಸುವುದಿಲ್ಲ.<br>• ಬಡ್ಡಿ ಸಹಾಯಧನ ಜಿಲ್ಲಾ ಮಟ್ಟದ ತಾಂತ್ರಿಕ ಸಮಿತಿ ನಿಗದಿಪಡಿಸಿದ ಸ್ಕೇಲ್ ಆಫ್ ಪೈನಾನ್ಸ್‌ಗೆ ಮಾತ್ರ ಲಭಿಸುತ್ತದೆ.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮರುಪಾವತಿಸಿರಬೇಕು. |

| | | |
|---|---|---|
| | | **2) ಕುಟುಂಬಕ್ಕೆ 10.00 ಲಕ್ಷಗಳವರೆಗೆ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಸಾಲಗಳನ್ನು ಶೇಕಡ 3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ.**<br>• ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಹಾಗೂ ಕೃಷಿ ಸಂಬಂಧಿತ ಸಾಲಗಳಿಗೆ ಅನ್ವಯವಾಗುತ್ತದೆ.<br>• ನಬಾರ್ಡ್ ಗುರುತಿಸಿದ ಕೃಷಿ / ಕೃಷಿ ಸಂಬಂಧಿತ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳ ಪೈಕಿ ಲಘು ನೀರಾವರಿ, ಭೂ ಅಭಿವೃದ್ಧಿ, ಕೃಷಿ ಯಾಂತ್ರೀಕರಣ, ಪ್ಲಾಂಟೇಷನ್ ಹಾಗೂ ತೋಟಗಾರಿಕೆ ಅಭಿವೃದ್ಧಿ, ಸಾವಯವ ಕೃಷಿ, ಪಶುಸಂಗೋಪನೆ ಹಾಗೂ ಹೈನುಗಾರಿಕೆ, ಮೀನು ಕೃಷಿ, ರೇಷ್ಮೆ ಕೃಷಿ, ಜೇನು ಸಾಕಾಣಿಕೆ ಉದ್ದೇಶಗಳಿಗೆ ರೈತರಿಗೆ ನೀಡಲಾಗುವ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ಈ ಯೋಜನೆಯು ಕೊಯ್ಲು (Harvest) ವರೆಗಿನ ಮತ್ತು ಕೊಯ್ಲು ನಂತರದ ಕೃಷಿ ಚಟುವಟಿಕೆಗಳಿಗೆ ಅಂದರೆ ಮಾರುಕಟ್ಟೆಗೆ ಕೃಷಿ ಉತ್ಪನ್ನ ಸಿದ್ಧವಾಗುವ ಹಂತದ ವರೆಗೆ (threshing, winnowing, cleaning, grading, drying) ಅವಶ್ಯವಿರುವ ಕೃಷಿ ಯಂತ್ರೋಪಕರಣ/ಘಟಕಗಳನ್ನು ಹೊಂದಲು ನೀಡುವ ಸಾಲಗಳಿಗೂ ಸಹ ಅನ್ವಯವಾಗುತ್ತದೆ.<br>• ದ್ವಿಚಕ್ರ ವಾಹನ, ಜೀಪು, ಪಿಕಪ್‌ವ್ಯಾನ್ ಹಾಗೂ ಇನ್ನು ಮುಂತಾದ ಯಾವುದೇ ಕೃಷಿ ಸಾಗಾಣಿಕೆಗೆ ಬಳಸುವ ವಾಹನ ಸಾಲಗಳಿಗೆ, ತೋಟದ ಮನೆ, ಗ್ರಾಮೀಣ ಗೋದಾಮುಗಳಿಗೆ, ದ್ವಿತೀಯ ಸಂಸ್ಕರಣೆ, ಕೃಷಿ ಉತ್ಪನ್ನಗಳ ಮೌಲ್ಯವರ್ಧನೆ/ಆಹಾರ ಸಂಸ್ಕರಣೆ, ಕೃಷಿ ಕ್ಲಿನಿಕ್‌ಗೆ ನೀಡುವ ಸಾಲಗಳಿಗೆ ಈ ಯೋಜನೆ ಅನ್ವಯವಾಗುವುದಿಲ್ಲ<br>• ಈ ಯೋಜನೆಯು ಒಂದು ಕುಟುಂಬಕ್ಕೆ ರೂ.10.00 ಲಕ್ಷಗಳವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿ ದರದಲ್ಲಿ ಮರುಪಾವತಿಸಿರಬೇಕು. |
| ಇ) | ಈ ಸಾಲ ಯೋಜನೆಗಳ ಲಾಭ ಪಡೆಯಲು ರೈತರು ಅನುಸರಿಸಬೇಕಾಗಿರುವ ನಿಯಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಬಡ್ಡಿ ಸಹಾಯಧನ ಯೋಜನೆಯ ಲಾಭ ಪಡೆಯಲು ರೈತರು ಅನುಸರಿಸಬೇಕಾಗಿರುವ ನಿಯಮಗಳು ಈ ಕೆಳಗಿನಂತಿರುತ್ತವೆ.<br>**1) ಕುಟುಂಬಕ್ಕೆ ರೂ. 3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದ ಸಾಲದ ಯೋಜನೆ**<br>• ರೈತನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ತಾವು ವಾಸಿಸುವ ವ್ಯಾಪ್ತಿಯ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರತಕ್ಕದ್ದು.<br>• ಆಧಾರ್, ಪಡಿತರ ಚೀಟಿ ಮತ್ತು ಆರ್‌ಟಿಸಿ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಸಹಕಾರ ಸಂಘಗಳಿಗೆ ಅರ್ಜಿ ಸಲ್ಲಿಸಬೇಕು. ಸದರಿ ಆರ್‌ಟಿಸಿ ಮೇಲೆ ಇತರೇ ಬ್ಯಾಂಕುಗಳಲ್ಲಿ ಬೆಳೆ ಸಾಲ ಪಡೆದಿರಬಾರದು. |

| | | |
|---|---|---|
| | | • ರೈತನು ರೂ.20,000/-ಗಳ ವೇತನ/ಪಿಂಚಣಿ ಪಡೆಯದೇ ಇದ್ದರೆ ಅಥವಾ ಆದಾಯ ತೆರಿಗೆ ಪಾವತಿದಾರರಾಗಿಲ್ಲವೆಂಬ ಬಗ್ಗೆ ದೃಢೀಕರಣ ನೀಡತಕ್ಕದ್ದು.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮರುಪಾವತಿಸಿರಬೇಕು. |
| | | **2) <u>ಕುಟುಂಬಕ್ಕೆ ರೂ. 10.00 ಲಕ್ಷಗಳವರೆಗೆ ಮಧ್ಯಮಾವಧಿ/ದೀರ್ಘಾವಧಿ ಸಾಲಗಳನ್ನು ಶೇಕಡ 3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ.</u>**<br>• ರೈತನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ತಾವು ವಾಸಿಸುವ ವ್ಯಾಪ್ತಿಯ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರತಕ್ಕದ್ದು.<br>• ಭೂಮಿ ದಾಖಲೆಗಳು, ಭದ್ರತೆಗೆ ಬೇಕಾದ ದಾಖಲೆಗಳು ಮತ್ತು ಯೋಜನಾ ವರದಿಯೊಂದಿಗೆ ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಸಂಘಗಳಿಗೆ ಅರ್ಜಿ ಸಲ್ಲಿಸಬೇಕು.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿಯನ್ನು ಪಾವತಿಸಬೇಕು. |
| ಈ) | ರೈತರಿಗಾಗಿ ಸಹಕಾರ ಇಲಾಖೆಯಿಂದ ವಾಹನ ಸಾಲ ಯೋಜನೆ ಜಾರಿಯಲ್ಲಿದೆಯೇ: ಹಾಗಿದ್ದಲ್ಲಿ, ಯಾವ ಯಾವ ವಾಹನಗಳಿಗೆ ಸಾಲ ನೀಡಲಾಗುತ್ತಿದೆ; ಸಬ್ಸಿಡಿಯನ್ನು ಎಷ್ಟು ನೀಡಲಾಗುತ್ತದೆ? (ವಿವರ ನೀಡುವುದು) | ಸಹಕಾರ ಸಂಘ/ಬ್ಯಾಂಕುಗಳಲ್ಲಿ ರೈತರಿಗಾಗಿ ಸಾಮಾನ್ಯ ಬಡ್ಡಿ ದರದಲ್ಲಿ ವಾಹನ ಸಾಲ ನೀಡುವ ಯೋಜನೆ ಜಾರಿಯಲ್ಲಿರುತ್ತದೆ. ಸಹಕಾರ ಸಂಘಗಳಲ್ಲಿ ದ್ವಿಚಕ್ರ ವಾಹನ, ಮೂರು ಚಕ್ರ ವಾಹನ, ನಾಲ್ಕು ಚಕ್ರ ಎಲ್ಲಾ ಬಗೆಯ ವಾಹನಗಳಿಗೂ ಸಹ ಸಾಮಾನ್ಯ ಬಡ್ಡಿ ದರದಲ್ಲಿ ಸಾಲ ವಿತರಿಸಲಾಗುತ್ತಿದ್ದು, ಈ ಸಾಲಗಳಿಗೆ ಸರ್ಕಾರದ ಬಡ್ಡಿ ಸಹಾಯಧನ ಲಭ್ಯವಿರುವುದಿಲ್ಲ.<br>ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಕೃಷಿ ಯಾಂತ್ರೀಕರಣ ಉದ್ದೇಶದಡಿ ಟ್ರಾಕ್ಟರ್ ಮತ್ತು ಪವರ್ ಟಿಲ್ಲರ್‌ಗಳಿಗೆ ಮಾತ್ರ ಒಂದು ಕುಟುಂಬಕ್ಕೆ ರೂ.10.00 ಲಕ್ಷಗಳವರೆಗೆ ಶೇ.3 ರ ಬಡ್ಡಿ ದರದಲ್ಲಿ ಸಾಲದ ಸೌಲಭ್ಯ ಇರುತ್ತದೆ. |

**ಸಂಖ್ಯೆ: ಸಿಒ 20 ಸಿಎಲ್‌ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು